# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೭ | ಬೆಂಗಳೂರು, ಗುರುವಾರ, ಡಿಸೆಂಬರ್ ೬, ೨೦೧೨ (ಮಾರ್ಗಶಿರ ೧೫, ಶಕ ವರ್ಷ ೧೯೩೪) | ಸಂಚಿಕೆ ೪೮ |
|---|---|---|


## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ:** ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವೂ ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಚಿತ್ರದುರ್ಗ ಜಿಲ್ಲಾ ಕೆ.ಡಿ.ಪಿ. ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ : ಯೋಇ 309 ಪಿಟಿಪಿ 94, ದಿನಾಂಕ 07–08–1995.
2. ಭಾರತೀಯ ಜನತಾ ಪಾರ್ಟಿಯ ರಾಜ್ಯ ಉಪಾಧ್ಯಕ್ಷರ ಸಂಖ್ಯೆ : ರಾಕಾ/ನಾನಿ/282/2012, ದಿನಾಂಕ 17.04.2012.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ದಿನಾಂಕ 07–08–1995ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವೂ ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ / ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಮೇಲೆ ಓದಲಾದ (2)ರ ಪತ್ರದಲ್ಲಿ ಉಪಾಧ್ಯಕ್ಷರು ಭಾರತೀಯ ಜನತಾ ಪಾರ್ಟಿ, ಬೆಂಗಳೂರು ಇವರ ಪತ್ರಗಳ ಶಿಫಾರಸ್ಸು ಮೇರೆಗೆ ಚಿತ್ರದುರ್ಗ ಕೆ.ಡಿ.ಪಿ. ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಯೋಇ 109 ಯೋವಿವಿ 2009, ಬೆಂಗಳೂರು, ದಿನಾಂಕ : 2ನೇ ಜುಲೈ 2012**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಈ ಕೆಳಕಂಡ ಐದು ಜನರನ್ನು ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನಾಗಿ ನಾಮನಿರ್ದೇಶನ ಮಾಡಲಾಗಿದೆ.

**ಚಿತ್ರದುರ್ಗ ಜಿಲ್ಲೆ, ಜಿಲ್ಲಾ ಕೆ.ಡಿ.ಪಿ. ಸಮಿತಿಗೆ**

| ಕ್ರ. ಸಂ. | ಹೆಸರು ಮತ್ತು ವಿಳಾಸ | ವರ್ಗ |
|---|---|---|
| 1 | ಹೆಚ್.ಎಂ. ಮೋಹನ್ ಬಿನ್ ಈ ಮಲ್ಲೇಶಪ್ಪ, 'ಶ್ರೀದೇವಿ ಕೃಪ' ಅಜಾದ್‌ನಗರ, 1ನೇ ಕ್ರಾಸ್, ಚಿತ್ರದುರ್ಗ | ಸಾಮಾನ್ಯ |
| 2 | ಪಿ.ಜೆ. ಸಿದ್ದೇಶ್ವರಿ ಕೋಂ ಕೆ. ಶರಣಪ್ಪ, ಉತ್ಸವಾಂಬ ದೇವಸ್ಥಾನದ ಹತ್ತಿರ, ದೊಡ್ಡಪೇಟೆ, ಚಿತ್ರದುರ್ಗ | ಮಹಿಳೆ |

| ಕ್ರ. ಸಂ. | ಹೆಸರು ಮತ್ತು ವಿಳಾಸ | ವರ್ಗ |
|---|---|---|
| 3 | ಎಂ. ಮಲ್ಲೇಶ ಬಿನ್ ಮಲ್ಲಯ್ಯ, ಚೆನ್ನಗಾನಹಳ್ಳಿ ವಲಸೆ ಅಂಚೆ, ತಳಕು ಹೋಬಳಿ, ಚಳ್ಳಕೆರೆ (ತಾಲ್ಲೂಕು) | ಎಸ್.ಸಿ. |
| 4 | ಸಿ. ಚತ್ರಲಿಂಗಪ್ಪ ಬಿನ್ ಚಿತ್ತಪ್ಪ, ಪಿಲ್ಲಳ್ಳಿ ಗೇಟ್, ಸಿ. ಮಹದೇವಪುರ ಅಂಚೆ, ಪರಶುರಾಮಪುರ ಹೋಬಳಿ, ಚಳ್ಳಕೆರೆ (ತಾಲ್ಲೂಕು) | ಹಿಂ. ವರ್ಗ |
| 5 | ಅಬ್ದುಲ್ ರೆಹಮಾನ್ ಬಿನ್ ಎನ್. ಮುಕ್ತಾನ್, ನಾಯಕನಹಟ್ಟಿ, ಚಳ್ಳಕೆರೆ (ತಾಲ್ಲೂಕು) | ಅ.ಸಂ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್. ಉಮಾವತಿ,**
ಸರ್ಕಾರದ ಅಧೀನ ಕಾರ್ಯದರ್ಶಿ 1 & 2,
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

**P.R. 1936**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಶ್ರೀ ಡಿ.ಎನ್. ನಾಯಕ್, ಭಾ.ಆ.ಸೇ. (ನಿವೃತ್ತ) ಇವರನ್ನು ಕಾರ್ಯಕಾರಿ ನಿರ್ದೇಶಕರು, ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್, ಬೆಂಗಳೂರು ಈ ಹುದ್ದೆಯಿಂದ ವಿಮುಕ್ತಗೊಳಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ : ಆಕುಕ 271 ಸಿಜಿಇ 2011, ದಿನಾಂಕ 9–12–2011.

2. ಶ್ರೀ ಡಿ.ಎನ್. ನಾಯಕ್, ಕಾರ್ಯಕಾರಿ ನಿರ್ದೇಶಕರು, ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್, ಬೆಂಗಳೂರು, ಇವರ ಪತ್ರ ದಿನಾಂಕ 05–09–2012.

**ಪ್ರಸ್ತಾವನೆ :**

ಮೇಲೆ ಕ್ರಮಸಂಖ್ಯೆ (1) ರಲ್ಲಿ ಓದಲಾದ ದಿನಾಂಕ 9–12–2011 ರ ಸರ್ಕಾರಿ ಆದೇಶದಲ್ಲಿ ಶ್ರೀ ಡಿ.ಎನ್. ನಾಯಕ್, ಭಾ.ಆ.ಸೇ. (ನಿವೃತ್ತ) ಇವರನ್ನು ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್‌ನ ಕಾರ್ಯಕಾರಿ ನಿರ್ದೇಶಕರ ಹುದ್ದೆಗೆ ಗುತ್ತಿಗೆ ಆಧಾರದ ಮೇಲೆ ಮಾಸಿಕ ರೂ. 80,000 ಸಂಚಿತ ವೇತನದಲ್ಲಿ 2 ವರ್ಷಗಳ ಅವಧಿಗೆ ನೇಮಿಸಲಾಗಿತ್ತು.

ಮೇಲೆ ಕ್ರಮಸಂಖ್ಯೆ (2) ರಲ್ಲಿ ಓದಲಾದ ದಿನಾಂಕ 05–09–2012ರ ಪತ್ರದಲ್ಲಿ ಶ್ರೀ ಡಿ.ಎನ್. ನಾಯಕ್, ಭಾ.ಆ.ಸೇ. (ನಿವೃತ್ತ) ರವರು ಕೆಲವು ವೈಯಕ್ತಿಕ ಕಾರಣಗಳ ಹಿನ್ನೆಲೆಯಲ್ಲಿ ಕಾರ್ಯಕಾರಿ ನಿರ್ದೇಶಕರ ಹುದ್ದೆಯಲ್ಲಿ ಮುಂದುವರಿಯಲು ಸಾಧ್ಯವಾಗುತ್ತಿಲ್ಲವಾದ್ದರಿಂದ ಸದರಿ ಹುದ್ದೆಯಿಂದ ವಿಮುಕ್ತಿಗೊಳಿಸಲು ಕೋರಿರುತ್ತಾರೆ.

ಸರ್ಕಾರವು ಸದರಿಯವರ ಮನವಿಯನ್ನು ಪರಿಗಣಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಆಕುಕ 275 ಸಿಜಿಇ 2012, ಬೆಂಗಳೂರು, ದಿನಾಂಕ : 14ನೇ ಸೆಪ್ಟೆಂಬರ್ 2012**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಡಿ.ಎನ್. ನಾಯಕ್, ಭಾ.ಆ.ಸೇ. (ನಿವೃತ್ತ) ಇವರನ್ನು ಕಾರ್ಯಕಾರಿ ನಿರ್ದೇಶಕರು, ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್, ಬೆಂಗಳೂರು ಈ ಹುದ್ದೆಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಕರ್ತವ್ಯದಿಂದ ವಿಮುಕ್ತಿಗೊಳಿಸಲಾಗಿದೆ.

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರನ್ನು ಕಾರ್ಯಕಾರಿ ನಿರ್ದೇಶಕರು, ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್, ಬೆಂಗಳೂರು, ಈ ಹುದ್ದೆಯಲ್ಲಿ ಮುಂದಿನ ಆದೇಶದವರೆಗೆ ಹೆಚ್ಚುವರಿಯಾಗಿ ಪ್ರಭಾರದಲ್ಲಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಪಿ. ನಾರಾಯಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**P.R. 2087**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ, ಬೆಂಗಳೂರು, ಇದರ ಉಪಾಧ್ಯಕ್ಷರ ಆಪ್ತ ಶಾಖೆ ಹಾಗೂ ಸಮಿತಿಯ ಶಾಖೆಗೆ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 68 ಶಿಸನೇ 2008, ದಿನಾಂಕ 05–08–2008.
2. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 68 ಶಿಸನೇ 2008, ದಿನಾಂಕ 24–11–2008.
3. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 55 ಶಿಸನೇ 2010, ದಿನಾಂಕ 10–08–2010.
4. ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ, ಇವರ ಕಡತ ಸಂಖ್ಯೆ : ಅಭಾಸಕ/ಅಕಾ/33/2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶ ದಿನಾಂಕ 05–08–2008 ರಲ್ಲಿ ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ ಇದನ್ನು ಮಾನ್ಯ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ, ಒಬ್ಬರು ಉಪಾಧ್ಯಕ್ಷರು, ಒಬ್ಬರು ಸದಸ್ಯ ಕಾರ್ಯದರ್ಶಿ ಮತ್ತು 13 ಸದಸ್ಯರನ್ನು ಒಳಗೊಂಡಂತೆ ಸ್ವಾಯತ್ತ ಸಂಸ್ಥೆಯ ಸ್ಥಾನಮಾನ ನೀಡಿ ಸ್ಥಾಪಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಸರ್ಕಾರಿ ಆದೇಶ ದಿನಾಂಕ 24–11–2008 ರಲ್ಲಿ ಅನಿವಾಸಿ ಭಾರತೀಯ ಸಮಿತಿಯು ಸಮರ್ಪಕವಾಗಿ ಕಾರ್ಯನಿರ್ವಹಿಸಲು ಅನುವಾಗುವಂತೆ ಉಪಾಧ್ಯಕ್ಷರ ಆಪ್ತ ಶಾಖೆಗೆ ಹಾಗೂ ಸಮಿತಿಯ ಕಛೇರಿಗೆ ಅಗತ್ಯ ಸಿಬ್ಬಂದಿಯನ್ನು 02 ವರ್ಷಗಳ ಅವಧಿಗೆ ತಾತ್ಕಾಲಿಕವಾಗಿ ಸೃಜಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಸರ್ಕಾರಿ ಆದೇಶ ದಿನಾಂಕ 10–08–2010 ರಲ್ಲಿ ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ ಇದರ ಉಪಾಧ್ಯಕ್ಷರ ಆಪ್ತ ಶಾಖೆ ಹಾಗೂ ಸಮಿತಿಯ ಕಛೇರಿಯ ಹುದ್ದೆಗಳನ್ನು ದಿನಾಂಕ 24–11–2010 ರಿಂದ 02 ವರ್ಷಗಳ ಅವಧಿಗೆ ಮುಂದುವರಿಸಿದೆ.

ಮೇಲೆ ಓದಲಾದ ಕಡತದಲ್ಲಿ ಸದಸ್ಯ ಕಾರ್ಯದರ್ಶಿ, ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ ಇವರು ಅನಿವಾಸಿ ಭಾರತೀಯ ಸಮಿತಿಯಲ್ಲಿ ಪ್ರಸ್ತುತ ಇರುವ ಹುದ್ದೆಗಳು ದಿನಾಂಕ 23–11–2012 ಕ್ಕೆ ಮುಕ್ತಾಯವಾಗುವುದರಿಂದ, ದಿನಾಂಕ 24–11–2012 ರಿಂದ ಜಾರಿಗೆ ಬರುವಂತೆ 02 ವರ್ಷದ ಅವಧಿಯವರೆಗೆ ಮುಂದುವರಿಸುವಂತೆ ಕೋರಿರುತ್ತಾರೆ.

ಅದರಂತೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 08 ಅಭಾಸ 2012, ಬೆಂಗಳೂರು, ದಿನಾಂಕ : 27ನೇ ಆಗಸ್ಟ್ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ " ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ" ಇದರ ಉಪಾಧ್ಯಕ್ಷರ ಆಪ್ತ ಶಾಖೆಯ ಈ ಕೆಳಕಂಡ 06 ಹುದ್ದೆಗಳನ್ನು ಹಾಗೂ ಸಮಿತಿ ಶಾಖೆಯ 07 ಹುದ್ದೆಗಳನ್ನು ದಿನಾಂಕ 24–11–2012 ರಿಂದ ಜಾರಿಗೆ ಬರುವಂತೆ 1 ವರ್ಷದ ಅವಧಿಗೆ ಮುಂದುವರೆಸಿದೆ.

**ಆಪ್ತ ಶಾಖೆಗೆ :**

| | |
|---|---|
| ಆಪ್ತ ಕಾರ್ಯದರ್ಶಿ | 01 ಹುದ್ದೆ |
| ಗ್ರೂಪ್ ಸಿ | 02 ಹುದ್ದೆಗಳು |
| ಗ್ರೂಪ್ ಡಿ | 02 ಹುದ್ದೆಗಳು |
| ವಾಹನ ಚಾಲಕ | 01 ಹುದ್ದೆ |

**ಸಮಿತಿಯ ಶಾಖೆಗೆ :**

| | |
|---|---|
| ಸದಸ್ಯ–ಕಾರ್ಯದರ್ಶಿ | 01 ಹುದ್ದೆ |
| ಅಧೀನ ಕಾರ್ಯದರ್ಶಿ | 01 ಹುದ್ದೆ |
| ಡಾಟಾ ಎಂಟ್ರಿ ಆಪರೇಟರ್ | 01 ಹುದ್ದೆ |

| | |
|---|---|
| ಸಹಾಯಕ/ಕಿರಿಯ ಸಹಾಯಕ | 01 ಹುದ್ದೆ |
| ಕಿರಿಯ ಸಹಾಯಕ | 01 ಹುದ್ದೆ |
| ವಾಹನ ಚಾಲಕ | 01 ಹುದ್ದೆ |
| ಗ್ರೂಪ್ ಡಿ | 01 ಹುದ್ದೆ |
| | **07 ಹುದ್ದೆಗಳು** |

2. ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಆಇ 734 ವೆಚ್ಚ–12 2012, ದಿನಾಂಕ 18–08–2012 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಜಿ. ಶಶಿಕಲಾ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.

(ಆಡಳಿತ ಸುಧಾರಣೆ–ನಾಗರೀಕ ಸೇವೆಗಳು ಮತ್ತು

ರಾಜಕೀಯ ವಿಶ್ರಾಂತಿ ವೇತನ)

**P.R. 2088**

## ವಸತಿ ಸಚಿವಾಲಯ

### ತಿದ್ದುಪಡಿ

### ಸಂಖ್ಯೆ : ವಇ 352 ಕಗೃಮಂ 2011, ಬೆಂಗಳೂರು, ದಿನಾಂಕ 20–06–2012

**ವಿಷಯ:** ಯಲಹಂಕ ಉಪನಗರದಲ್ಲಿ ಕರ್ನಾಟಕ ಗೃಹ ಮಂಡಳಿಯ ಬಡಾವಣೆಯಲ್ಲಿರುವ ನಿವೇಶನ ಸಂಖ್ಯೆ : 24ರ 3.34 ಎಕರೆ ವಿಸ್ತೀರ್ಣದ ಜಾಗದಲ್ಲಿ ಕರ್ನಾಟಕ ಗೃಹ ಮಂಡಳಿಯು ಖಾಸಗಿ ಸಹಭಾಗಿತ್ವದಲ್ಲಿ ವಾಣಿಜ್ಯ ಸಂಕೀರ್ಣ ನಿರ್ಮಾಣ ಕೈಗೊಳ್ಳಲು ಅನುಮೋದನೆ ನೀಡುವ ಬಗ್ಗೆ.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಸರ್ಕಾರಿ ಆದೇಶ ಸಂಖ್ಯೆ : ವಇ 352 ಕಗೃಮಂ 2011, ದಿನಾಂಕ 19–06–2012ರ ಆದೇಶ ಭಾಗದ ಮೂರನೇ ಪಂಕ್ತಿಯಲ್ಲಿ "**ನಿವೇಶನ ಸಂಖ್ಯೆ 24 ರಲ್ಲಿನ 3.24 ಎಕರೆ**" ಎಂಬುದರ ಬದಲಾಗಿ "**ನಿವೇಶನ ಸಂಖ್ಯೆ : 24 ರಲ್ಲಿನ 3.34 ಎಕರೆ**" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್. ಪಾರ್ವತಿ,**

ಪೀಠಾಧಿಕಾರಿ,

ವಸತಿ ಇಲಾಖೆ.

ಕರ್ನಾಟಕ ಸರ್ಕಾರದ ಸಚಿವಾಲಯ.

**P.R. 2080**

## ಇಂಧನ ಸಚಿವಾಲಯ

### ತಿದ್ದುಪಡಿ

### ಸಂಖ್ಯೆ : ಇಎನ್ 120 ಎನ್‌ಸಿಇ 2011, ಬೆಂಗಳೂರು, ದಿನಾಂಕ 03–08–2012

ಮೆ॥ ವಿಜಯಲಕ್ಷ್ಮಿ ಹೈಡ್ರೋ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಚಿತ್ರದುರ್ಗ ಜಿಲ್ಲೆಯ ದೊನೆಹಳ್ಳಿ, ಅಕ್ಕನೂರು, ಹೊನ್ನಮರಡಿ, ಗೌರಮ್ಮನಹಳ್ಳಿ ಮತ್ತು ತೋರಣಗಟ್ಟೆ ಪ್ರದೇಶಗಳಲ್ಲಿ 15.00 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಿರುವ ಸರ್ಕಾರಿ ಆದೇಶ ಸಂಖ್ಯೆ : ಇಎನ್ 120 ಎನ್‌ಸಿಇ 2011 ದಿನಾಂಕ 13–03–2012ರ ಆದೇಶ ಭಾಗದ ಷರತ್ತಿನ ಕ್ರಮ ಸಂಖ್ಯೆ (8) ರಲ್ಲಿ ನಮೂದಿಸಲಾಗಿರುವ

ಅಭಿವೃದ್ಧಿದಾರರು ಈ ಯೋಜನೆಯನ್ನು 2013–14 ರೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು ಹಾಗೂ ಅದರಂತೆ, ಕೆ.ಆರ್.ಇ.ಡಿ.ಎಲ್.ಗೆ ಮುಚ್ಚಳಿಕೆ ಬರೆದುಕೊಡತಕ್ಕದ್ದು.

**ಎಂಬುದರ ಬದಲಾಗಿ**

ಅಭಿವೃದ್ಧಿದಾರರು ಈ ಯೋಜನೆಯನ್ನು ಕ್ರಮಸಂಖ್ಯೆ (1) ರಲ್ಲಿ ಸೂಚಿಸಿದಂತೆ 3 ವರ್ಷದ ಅವಧಿಯೊಳಗೆ ಅನುಷ್ಠಾನಗೊಳಿಸುವುದಾಗಿ ಕೆ.ಆರ್.ಇ.ಡಿ.ಎಲ್.ಗೆ ಮುಚ್ಚಳಿಕೆ ಬರೆದುಕೊಡತಕ್ಕದ್ದು. ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೌಸಲ್ಯಾ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**P.R. 2076**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಹೆಚ್ಚುವರಿ ನಿರ್ದೇಶಕರ ಸೇವಾ ವಿಷಯಗಳನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಕಾರ್ಯ ವ್ಯಾಪ್ತಿಯಿಂದ ಹೊರತುಪಡಿಸಿ ಆಯಾ ಆಡಳಿತ ಇಲಾಖೆಗಳಿಗೆ ವಹಿಸುವ ಬಗ್ಗೆ.

**ಪ್ರಸ್ತಾವನೆ :**

ಕರ್ನಾಟಕ ಸರ್ಕಾರದ (ಕೆಲಸಗಳ ಹಂಚಿಕೆ) ನಿಯಮಗಳು 1977ರ ಷೆಡ್ಯೂಲ್–II ರಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ನಿರ್ದಿಷ್ಟಪಡಿಸಿರುವ ವಿಷಯಗಳಲ್ಲಿ ಕ್ರಮ ಸಂಖ್ಯೆ (6) ರಲ್ಲಿ "ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ – ಆಡಳಿತ ನಿಯಂತ್ರಣದಲ್ಲಿರುವ ಅಧಿಕಾರಿಗಳ ಮತ್ತು ಇತರ ಸಿಬ್ಬಂದಿಯ, ಜಿಲ್ಲಾಧಿಕಾರಿಗಳ, ಜಿಲ್ಲಾ ಪೋಲೀಸ್ ಅಧೀಕ್ಷಕರ ಮತ್ತು ಇಲಾಖಾ ಮುಖ್ಯಸ್ಥರ ದರ್ಜೆಯ ಎಲ್ಲಾ ಅಧಿಕಾರಿಗಳ ನೇಮಕಗಳು ಸ್ಥಳ ನಿಯುಕ್ತಿಗಳು, ವರ್ಗಾವಣೆಗಳು, ರಜೆ ಮತ್ತು ನಿಯಂತ್ರಣ" ಎಂದು ನಮೂದಿಸಲಾಗಿದೆ. ಈ ಹುದ್ದೆಗಳಲ್ಲಿ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖಾ ವ್ಯಾಪ್ತಿಯ ಹೆಚ್ಚುವರಿ ನಿರ್ದೇಶಕರ ಸೇವಾ ವಿಷಯಗಳನ್ನು ಹೊರತುಪಡಿಸಿ ಇತರೆ ಯಾವುದೇ ಇಲಾಖೆಯ ಹೆಚ್ಚುವರಿ ನಿರ್ದೇಶಕರ ಸೇವಾ ವಿಷಯಗಳನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯಲ್ಲಿ ನಿರ್ವಹಿಸುತ್ತಿಲ್ಲ.

ಆದುದರಿಂದ ಈ ಪದ್ಧತಿಯಲ್ಲಿ ಏಕರೂಪತೆ ಸ್ಥಾಪಿಸಲು ಕರ್ನಾಟಕ ನಾಗರೀಕ ಸೇವಾ ನಿಯಮಗಳಲ್ಲಿ ಇಲಾಖಾ ಮುಖ್ಯಸ್ಥರ ದರ್ಜೆಯ ಹುದ್ದೆಗಳೆಂದು ಗುರುತಿಸಲ್ಪಟ್ಟಿರುವ ಹೆಚ್ಚುವರಿ ನಿರ್ದೇಶಕರು ಮತ್ತಿತರ ಹುದ್ದೆಗಳ ಬಡ್ತಿ, ನೇಮಕಗಳು, ಸ್ಥಳ ನಿಯುಕ್ತಿಗಳು, ವರ್ಗಾವಣೆಗಳು, ರಜೆ ಮತ್ತು ನಿಯಂತ್ರಣದ ವಿಷಯಗಳನ್ನು ಸಂಬಂಧಿಸಿದ ಆಡಳಿತ ಇಲಾಖೆಗಳೇ ನಿರ್ವಹಿಸುವುದು ಸೂಕ್ತವೆಂದು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಪರಿಗಣಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 282 ಸೇಇಮು 2011, ಬೆಂಗಳೂರು, ದಿನಾಂಕ : 22ನೇ ಜೂನ್ 2012**

ಕರ್ನಾಟಕ ಸರ್ಕಾರದ (ಕೆಲಸಗಳ ಹಂಚಿಕೆ) ನಿಯಮಗಳು, 1977ರ ಷೆಡ್ಯೂಲ್–II ರಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಗೆ ಹಂಚಿಕೆ ನಿರ್ದಿಷ್ಟಪಡಿಸಿರುವ ವಿಷಯಗಳಲ್ಲಿ ಕ್ರಮ ಸಂಖ್ಯೆ (6) ರಲ್ಲಿ ನಮೂದಿಸಿರುವಂತೆ ಇಲಾಖಾ ಮುಖ್ಯಸ್ಥರ ದರ್ಜೆಯ ವೃಂದದಲ್ಲಿ, ನಿರ್ದೇಶಕರ ದರ್ಜೆಯ ಅಧಿಕಾರಿಗಳನ್ನು ಹೊರತುಪಡಿಸಿ ಉಳಿದ ಎಲ್ಲಾ ಜಂಟಿ ನಿಯಂತ್ರಕರು, ಜಂಟಿ ನಿರ್ದೇಶಕರು ಮತ್ತು ಹೆಚ್ಚುವರಿ ನಿರ್ದೇಶಕರ ದರ್ಜೆಯ ಅಧಿಕಾರಿಗಳ ಬಡ್ತಿ, ನೇಮಕಗಳು, ಸ್ಥಳ ನಿಯುಕ್ತಿಗಳು, ವರ್ಗಾವಣೆಗಳು, ರಜೆ, ನಿಯಂತ್ರಣ ಮತ್ತಿತರ ಎಲ್ಲಾ ಸೇವಾ ವಿಷಯಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸಂಬಂಧಿಸಿದ ಆಡಳಿತ ಇಲಾಖೆಗಳೇ ನಿರ್ವಹಿಸುವಂತೆ ಈ ಮೂಲಕ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಕೆ. ಲಕ್ಷ್ಮೀನಾರಾಯಣ ರಾವ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.

(ಸೇವೆಗಳು–3)

**P.R. 2084**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕೃಷಿ ಮತ್ತು ತೋಟಗಾರಿಕೆ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ (ಆಹಾರ ಸಂಸ್ಕರಣೆ ಮತ್ತು ಕಟಾವು ತಂತ್ರಜ್ಞಾನ) ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಮುಂದುವರಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 15 ಸಸಿವಿ 2001, ದಿನಾಂಕ 20–04–2001.
2. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 04 ಸಸಿವಿ 2002, ದಿನಾಂಕ 04–04–2002.
3. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 219 ಸಅಸೇ 2010, ದಿನಾಂಕ 25–06–2010.
4. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 220 ಸಅಸೇ 2011, ದಿನಾಂಕ 23–06–2011.
5. ಕೃಷಿ ಮತ್ತು ತೋಟಗಾರಿಕೆ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ, ರವರ ದಿನಾಂಕ 04.06.2012ರ ಅ.ಸ.ಪ. ಸಂಖ್ಯೆ : ಕೃತೋಇ (ಆಸಂ) 5457/ಪ್ರಕಾ/2011.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ಮತ್ತು (2) ರಲ್ಲಿ ಓದಲಾದ ದಿನಾಂಕ 20–04–2001 ಮತ್ತು 04–04–2002ರ ಸರ್ಕಾರಿ ಆದೇಶಗಳಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಕೃಷಿ ಮತ್ತು ತೋಟಗಾರಿಕೆ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ (ಆಹಾರ ಸಂಸ್ಕರಣೆ ಮತ್ತು ಕಟಾವು ತಂತ್ರಜ್ಞಾನ) ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ತಾತ್ಕಾಲಿಕವಾಗಿ ಸೃಜಿಸಲಾಗಿದೆ ಹಾಗೂ ಈ ಹುದ್ದೆಗಳನ್ನು ಕಾಲಕಾಲಕ್ಕೆ ಮುಂದುವರಿಸಿಕೊಂಡು ಬರಲಾಗುತ್ತಿದ್ದು, ದಿನಾಂಕ 23–06–2011ರ ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 220 ಸಅಸೇ 2001 ರಲ್ಲಿ ದಿನಾಂಕ 06.07.2011 ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಕೃಷಿ ಮತ್ತು ತೋಟಗಾರಿಕೆ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ (ಆಹಾರ ಸಂಸ್ಕರಣೆ ಮತ್ತು ಕಟಾವು ತಂತ್ರಜ್ಞಾನ) ಇವರ ಅರೆ ಸರ್ಕಾರಿ ಪತ್ರದಲ್ಲಿ ಪ್ರಧಾನ ಕಾರ್ಯದರ್ಶಿ ಹುದ್ದೆ ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ 06.07.2012 ರಿಂದ ಮುಂದಿನ ಅವಧಿಗೆ ಮುಂದುವರಿಸುವಂತೆ ಕೋರಲಾಗಿದೆ. ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 359 ಸಅಸೇ 2012, ಬೆಂಗಳೂರು, ದಿನಾಂಕ : 07ನೇ ಜುಲೈ 2012**

ದಿನಾಂಕ 20–04–2001 ಮತ್ತು ದಿನಾಂಕ 04–04–2002ರ ಸರ್ಕಾರಿ ಆದೇಶಗಳಲ್ಲಿ ಸೃಜಿಸಲಾಗಿರುವ ಕೃಷಿ ಮತ್ತು ತೋಟಗಾರಿಕೆ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ (ಆಹಾರ ಸಂಸ್ಕರಣೆ ಮತ್ತು ಕಟಾವು ತಂತ್ರಜ್ಞಾನ) ಹುದ್ದೆಯನ್ನು ಕೆಳಕಂಡ ಪೂರಕ ಸಿಬ್ಬಂದಿಗಳೊಂದಿಗೆ ದಿನಾಂಕ 06–07–2012 ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಆಪ್ತ ಕಾರ್ಯದರ್ಶಿ ಗ್ರೇಡ್–2 / ಪತ್ರಾಂಕಿತ ಆಪ್ತ ಸಹಾಯಕರು | 1 |
| 2 | ಪತ್ರಾಂಕಿತ ಆಪ್ತ ಸಹಾಯಕರು / ಹಿರಿಯ ಶೀಘ್ರಲಿಪಿಗಾರ | 2 |
| 3 | ಶಾಖಾಧಿಕಾರಿ/ಹಿರಿಯ ಸಹಾಯಕ | 1 |
| 4 | ಸಹಾಯಕ/ಕಿರಿಯ ಸಹಾಯಕ | 1 |
| 5 | ವಾಹನ ಚಾಲಕ | 1 |
| 6 | ದಲಾಯತ್ | 2 |
| | **ಒಟ್ಟು** | **08** |

ಈ ಆದೇಶವನ್ನು ದಿನಾಂಕ 10–07–1996ರ ಸರ್ಕಾರದ ಆದೇಶ ಸಂಖ್ಯೆ ಆಇ 01 ಟಿಎಫ್‌ಪಿ 96 ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆಯು ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಕೆ. ಲಕ್ಷ್ಮೀನಾರಾಯಣ ರಾವ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.
(ಸೇವೆಗಳು–3)

**P.R. 2085**

## ಕಂದಾಯ ಸಚಿವಾಲಯ

**ವಿಷಯ:** ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಶ್ರೀಗಂಧದಕಾವಲ್ ಗ್ರಾಮಕ್ಕೆ ಸೇರಿದ ಸ.ನಂ.51 ರಲ್ಲಿ ಒಕ್ಕಲಿಗರ ಸಂಘಕ್ಕೆ ಭೂಮಿಯನ್ನು ಗುತ್ತಿಗೆ ಆಧಾರದ ಮೇಲೆ ನೀಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 53 ಜಿಎಸ್‌ಎ 1964, ದಿನಾಂಕ 12–01–1967.

2. ಜಿಲ್ಲಾಧಿಕಾರಿ ಪತ್ರ ಸಂಖ್ಯೆ : ಎಲ್.ಎನ್.ಡಿ. (ಎನ್) ಸಿ.ಆರ್./265/2006–07, ದಿನಾಂಕ 23–06–2012.

**ಪ್ರಸ್ತಾವನೆ :**

ಮೇಲೆ ಕ್ರಮಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಶ್ರೀಗಂಧದ ಕಾವಲ್ ಗ್ರಾಮದ ಸ.ನಂ. 51 ರಲ್ಲಿ 10.00 ಎಕರೆ ವಿಸ್ತೀರ್ಣದ ಸರ್ಕಾರಿ ಗೋಮಾಳವನ್ನು ಎಕರೆಗೆ ರೂ.300–00 ಮೊತ್ತದ ಮಾರುಕಟ್ಟೆ ಬೆಲೆಗೆ ವಿಧಿಸಿ ಮಂಜೂರು ಮಾಡಲಾಗಿದ್ದು, ಸ.ನಂ. 130 ರಲ್ಲಿ 10.00 ಎಕರೆ ಭೂಮಿಯನ್ನು 30 ವರ್ಷಗಳ ಅವಧಿಗೆ ಭೂ ಕಂದಾಯಕ್ಕೆ ಅನುಗುಣವಾಗಿ ವಾರ್ಷಿಕ ಬಾಡಿಗೆ (annual rent) ಯನ್ನು ಸರ್ಕಾರಕ್ಕೆ ಜಮಾ ಮಾಡಬೇಕೆಂಬ ಷರತ್ತು ವಿಧಿಸಿ ಒಕ್ಕಲಿಗರ ಸಂಘ ಇವರಿಗೆ ಶೈಕ್ಷಣಿಕ ಉದ್ದೇಶಕ್ಕೆ ಗುತ್ತಿಗೆ ಆಧಾರದ ಮೇಲೆ ನೀಡಲಾಗಿತ್ತು.

ಈ ಹಿಂದಿನ ಗುತ್ತಿಗೆ ಅವಧಿಯು ದಿನಾಂಕ 27–02–1997 ರಂದು ಮುಗಿದಿರುತ್ತದೆ.

ಆದಕಾರಣ, ಅಧ್ಯಕ್ಷರು, ಒಕ್ಕಲಿಗರ ಸಂಘ, ಬೆಂಗಳೂರು ಇವರು ದಿನಾಂಕ 21–02–2012 ಹಾಗೂ 1–3–2012 ರಂದು ಮನವಿಗಳನ್ನು ಸಲ್ಲಿಸುತ್ತಾ, ಉಲ್ಲೇಖಿತ ಭೂಮಿಗೆ ಸಂಬಂಧಿಸಿದ ಗುತ್ತಿಗೆ ಅವಧಿಯನ್ನು ನಂತರದ ಅವಧಿಗೆ ಮುಂದುವರೆಸುವಂತೆ ಕೋರಿರುತ್ತಾರೆ.

ಈ ಕುರಿತಂತೆ ಜಿಲ್ಲಾಧಿಕಾರಿ, ಬೆಂಗಳೂರು ಇವರು ದಿನಾಂಕ 23–06–2012 ರಂದು ಪತ್ರ ಬರೆಯುತ್ತಾ, ಒಕ್ಕಲಿಗರ ಸಂಘವು ಬೆಂಗಳೂರಿನ ಶ್ರೀಗಂಧದಕಾವಲ್ ಸ.ನಂ.130 ರಲ್ಲಿನ ಭೂಮಿಯನ್ನು ಶೈಕ್ಷಣಿಕ ಉದ್ದೇಶಕ್ಕೆ ಉಪಯೋಗಿಸುತ್ತಿರುವ ಹಿನ್ನೆಲೆಯಲ್ಲಿ ಗುತ್ತಿಗೆಯನ್ನು ನವೀಕರಿಸಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಈ ಹಿನ್ನೆಲೆಯಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

### ಸರ್ಕಾರಿ ಆದೇಶ ಸಂಖ್ಯೆ : ಆರ್‌ಡಿ 175 ಎಲ್‌ಜಿಬಿ 2012, ಬೆಂಗಳೂರು, ದಿನಾಂಕ : 16ನೇ ಜುಲೈ 2012

ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಶ್ರೀಗಂಧದಕಾವಲ್ ಗ್ರಾಮಕ್ಕೆ ಸೇರಿದ ಸ.ನಂ.51 ರಲ್ಲಿನ 10–00 ಎಕರೆ ಸರ್ಕಾರಿ ಮುಫತ್ ಗೋಮಾಳ ಜಮೀನನ್ನು ದಿನಾಂಕ 28–02–1997 ರಿಂದ ಅನ್ವಯಿಸುವಂತೆ ಭೂಮಿಯ ಮಾರುಕಟ್ಟೆ ಬೆಲೆಯ ಶೇಕಡ 10 ರಷ್ಟು ನಿಗದಿಪಡಿಸಿ ಆ ಮೊತ್ತವನ್ನು ಪ್ರತಿ ಎರಡು ವರ್ಷಗಳಿಗೊಮ್ಮೆ ಶೇಕಡ 10 ರಷ್ಟು ಹೆಚ್ಚಿಸುವ ಷರತ್ತಿಗೊಳಪಟ್ಟು ಕರ್ನಾಟಕ ಭೂ ಮಂಜೂರಾತಿ ನಿಯಮಗಳ 1969 ನಿಯಮ 19(ಎ) ಹಾಗೂ 19(3)(ಬಿ) ರನ್ವಯ 30 ವರ್ಷಗಳ ಅವಧಿಗೆ ಗುತ್ತಿಗೆ ನವೀಕರಿಸಿ ಮುಂದುವರೆಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ.ಕೆ. ರಾಮಸ್ವಾಮಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ.
(ಭೂ.ಮಂ.)

**P.R. 1895**

**ಕಂದಾಯ ಸಚಿವಾಲಯ**

**ವಿಷಯ:** ಬೆಂಗಳೂರು ದಕ್ಷಿಣ ತಾಲ್ಲೂಕು, ಚನ್ನೇನಹಳ್ಳಿ ಗ್ರಾಮದ ಸ.ನಂ. 19 ರಲ್ಲಿನ ಸರ್ಕಾರಿ ಜಮೀನನ್ನು ಜನಸೇವಾ ವಿಶ್ವಸ್ಥ ಮಂಡಳಿ, ಬೆಂಗಳೂರು ಇವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 277 ಎಲ್‌ಜಿಬಿ 2007, ದಿನಾಂಕ 21–02–2009.

**ಪ್ರಸ್ತಾವನೆ :**

ಮೇಲೆ ಓದಲಾದ ಆದೇಶದಲ್ಲಿ ಬೆಂಗಳೂರು ದಕ್ಷಿಣ ತಾಲ್ಲೂಕು, ತಾವೇರೆಕೆರೆ ಹೋಬಳಿ, ಚನ್ನೇನಹಳ್ಳಿ ಗ್ರಾಮದ ಸ.ನಂ. 19 ರಲ್ಲಿ 6–00 ಎಕರೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಜನಸೇವಾ ವಿಶ್ವಸ್ಥ ಮಂಡಳಿ, ಬೆಂಗಳೂರು ಇವರಿಗೆ ಜಮೀನಿನ ಮಾರ್ಗಸೂಚಿ ಬೆಲೆಯ ಶೇಕಡ 50ರಷ್ಟು ದರ ನಿಗದಿಪಡಿಸಿ ಮಂಜೂರು ಮಾಡಲಾಗಿತ್ತು.

ನಂತರ ಗೌರವ ಕಾರ್ಯದರ್ಶಿ, ಜನಸೇವಾ ವಿಶ್ವಸ್ಥ ಮಂಡಳಿ, ಬೆಂಗಳೂರು ಇವರು ದಿನಾಂಕ 31–03–2012 ರಂದು ಪತ್ರ ಬರೆಯುತ್ತಾ, ಮೌಲ್ಯಾಧಾರಿತ/ಸಂಸ್ಕಾರಯುಕ್ತ ಶಿಕ್ಷಣವನ್ನು ಯುವ ಪೀಳಿಗೆಗೆ ನೀಡುವ ಉದ್ದೇಶದಿಂದ ಪ್ರಾರಂಭವಾದ ಜನಸೇವಾ ವಿದ್ಯಾ ಕೇಂದ್ರವು ಸಾವಿರಾರು ಜನ ವಿದ್ಯಾರ್ಥಿಗಳಿಗೆ ದೇಶಭಕ್ತಿ, ಧರ್ಮಶ್ರದ್ಧೆ, ಸಾಮಾಜಿಕ ದೃಷ್ಟಿಯುಳ್ಳ ಜೀವನ ಶಿಕ್ಷಣವನ್ನು ನೀಡುತ್ತಿರುವುದಾಗಿ ತಿಳಿಸಿರುತ್ತಾರೆ. ಆದಕಾರಣ ಈಗಾಗಲೇ ಜಮೀನಿನ ಮಾರ್ಗಸೂಚಿ ಬೆಲೆಯ ಶೇಕಡ 50 ರಷ್ಟು ನಿಗದಿಪಡಿಸಿದ ಮೊತ್ತದಲ್ಲಿ ಅರ್ಧದಷ್ಟಾದರೂ ಕಡಿತಗೊಳಿಸಿ ಮಂಜೂರು ಮಾಡುವಂತೆ ಕೋರಿರುತ್ತಾರೆ.

ಈ ಹಿನ್ನೆಲೆಯಲ್ಲಿ ಪುನಃ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಆರ್‌ಡಿ 264 ಎಲ್‌ಜಿಬಿ 2012, ಬೆಂಗಳೂರು, ದಿನಾಂಕ : 16ನೇ ಜುಲೈ 2012**

ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 277 ಎಲ್‌ಜಿಬಿ 2007 ದಿನಾಂಕ 21–02–2009 ನ್ನು ರದ್ದುಗೊಳಿಸಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳ 1969 ನಿಯಮ 27 ರಲ್ಲಿನ ಅಧಿಕಾರವನ್ನು ಚಲಾಯಿಸಿ ಬೆಂಗಳೂರು ದಕ್ಷಿಣ ತಾಲ್ಲೂಕು, ತಾವರೆಕೆರೆ ಹೋಬಳಿ, ಚನ್ನೇನಹಳ್ಳಿ ಗ್ರಾಮದ ಸ.ನಂ. 19 ರಲ್ಲಿ 6 ಎಕರೆ ಜಮೀನನ್ನು ಜಮೀನಿನ ಮಾರ್ಗಸೂಚಿ ಬೆಲೆಯ ಶೇಕಡ 25 ರಷ್ಟು ದರ ನಿಗದಿಪಡಿಸಿ ಗುರುಕುಲ ಮಾದರಿಯ ಶಾಲೆಯನ್ನು ನಡೆಸಲು ಜನಸೇವಾ ವಿಶ್ವಸ್ಥ ಮಂಡಳಿ, ಬೆಂಗಳೂರು ಇವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಮಂಜೂರು ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಕೆ. ರಾಮಸ್ವಾಮಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ.

(ಭೂ.ಮಂ.)

**P.R. 1894**